

# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1225 |
| ಸದಸ್ಯರ ಹೆಸರು | ಶ್ರೀ ಎನ್.ಎಸ್. ಬೋಸ್‌ರಾಜು (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 21/12/2018 |
| ಉತ್ತರಿಸುವವರು | ಪೌರಾಡಳಿತ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರು ಜಿಲ್ಲೆಯಲ್ಲಿರುವ ನಗರ ಸಭೆ, ಪುರಸಭೆ, ಪಟ್ಟಣ ಪಂಚಾಯತಿಗಳಲ್ಲಿ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | • ಹೈದ್ರಾಬಾದ್ ಕರ್ನಾಟಕ ಸ್ಥಳೀಯ ವೃಂದದ ನಗರ ಸ್ಥಳೀಯ ಸಂಸ್ಥೆಗಳಲ್ಲಿನ ಗ್ರೂಪ್ 'ಬಿ' ಮತ್ತು 'ಸಿ' ವೃಂದದ ಒಟ್ಟು 271 ಹುದ್ದೆಗಳನ್ನು ಭರ್ತಿ ಮಾಡಲು ಕರ್ನಾಟಕ ಲೋಕಾ ಸೇವಾ ಆಯೋಗಕ್ಕೆ ಪ್ರಸ್ತಾವನೆ ಸಲ್ಲಿಸಲಾಗಿದ್ದು, ಈವರೆವಿಗೆ 167 ನೌಕರರ ಆಯ್ಕೆ ಪಟ್ಟಿ ಸ್ವೀಕೃತವಾಗಿದ್ದು, ಈ ಪೈಕಿ 106 ಜನರಿಗೆ ನೇಮಕಾತಿ ಆದೇಶಗಳನ್ನು ನೀಡಲಾಗಿರುತ್ತದೆ. ಒಟ್ಟು 90 ಜನ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ರಾಯಚೂರು ಜಿಲ್ಲೆಗೆ ಕಿರಿಯ ಅಭಿಯಂತರರು-6, ಪರಿಸರ ಅಭಿಯಂತರರು-1, ಲೆಕ್ಕಿಗರು-1, ಪ್ರದಸ-2, ಪ್ರದಕಂನೀ-2, ಕಿರಿಯ ಆರೋಗ್ಯ ನೀರಿಕ್ಷಕರು-8 ಒಟ್ಟು -20 ಹುದ್ದೆಗಳನ್ನು ಈಗಾಗಲೆ ಭರ್ತಿಮಾಡಲಾಗಿದೆ. ಹಾಗೂ 40 ಅಭ್ಯರ್ಥಿಗಳಿಗೆ ದಾಖಲಾತಿಗಳ ಪರಿಶೀಲನೆ ಮಾಡಿ ನೇಮಕಾತಿ ಆದೇಶ ನೀಡುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.<br>• ಉಳಿದಂತೆ 371ಜೆ ಸ್ಥಳೀಯ ವೃಂದದ 139 ವಿವಿಧ ಹುದ್ದೆಗಳ ಆಯ್ಕೆ ಪ್ರಕ್ರಿಯೆ ಕರ್ನಾಟಕ ಲೋಕಾ ಸೇವಾ ಆಯೋಗದಲ್ಲಿ ಚಾಲ್ತಿಯಲ್ಲಿರುತ್ತದೆ. ಸೇವಾ ಆಯೋಗದಿಂದ ಆಯ್ಕೆ ಪಟ್ಟಿ ಬಂದ ನಂತರ ಉಳಿದ ಹುದ್ದೆಗಳ ಭರ್ತಿಗೆ ಕ್ರಮವಹಿಸಲಾಗುವುದು.<br>• ಕರ್ನಾಟಕ ಪುರಸಭೆ (ನಗರಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯಿತಿಗಳಲ್ಲಿನ ಪೌರಕಾರ್ಮಿಕರ ನೇಮಕಾತಿ) (ವಿಶೇಷ) ನಿಯಮಗಳು 2017ರ ನಿಯಮಗಳ ರೀತ್ಯಾ ರಾಯಚೂರು ಜಿಲ್ಲೆಯಲ್ಲಿ 333 ಪೌರಕಾರ್ಮಿಕರ ಹುದ್ದೆಗಳನ್ನು ನೇಮಕಾತಿ ಮಾಡಲು ಜಿಲ್ಲಾಧಿಕಾರಿಗಳ ಹಂತದಲ್ಲಿ ಅಧಿಸೂಚನೆ ಹೊರಡಿಸಿರುತ್ತಾರೆ. ಶೀಘ್ರವಾಗಿ ಪೌರಕಾರ್ಮಿಕರ ವಿಶೇಷ ನೇಮಕಾತಿ ನಿಯಮಗಳ ರೀತ್ಯಾ ನೇಮಕಾತಿಗಳನ್ನು ಮಾಡಲಾಗುವುದು. |

ಸಂಖ್ಯೆ: ನಅಇ 296 ಜಿಇಎಲ್ 2018

**(ರಮೇಶ್ ಲ. ಜಾರಕಿಹೊಳಿ)**
ಪೌರಾಡಳಿತ, ಬಂದರು ಮತ್ತು
ಒಳನಾಡು ಜಲಸಾರಿಗೆ ಸಚಿವರು.